ಒಂದಾಣೆ ಮಾಲೆ 127

# ದ್ವಾರಕಾ



[ದ್ವಿತೀಯ ಮುದ್ರಣ]

ಲೇಖಕರು:
ಶ್ರೀ। ಗುಂಡ್ಮಿ ಮಹಾಬಲ ಭಟ್ಟ.

ಪುರೀದ್ವಾರಾವತೀಮಧ್ಯೇ ಭಗವತ್ಪಾದಪೂಜಿತಂ ।
ಸರ್ವೇಷಾಂ ಶ್ರೇಯಸಾಂ ಸ್ಥಾನಂ ದ್ವಾರಕಾಧೀಶ ಮಂದಿರಂ ।



ಭವ್ಯವಾದ ಶ್ರೀ ದ್ವಾರಕಾಧೀಶ ದೇವಾಲಯ.

# ದ್ವಾರಕಾ

ಅಹೋ ಸನಾಥಾ ಭವತಾ ಸ್ಮಯದ್ವಯಂ
ತ್ರೈವಿಷ್ಟ ಪಾನಾಮಪಿ ದೂರದರ್ಶನವತ್ ।
ಪ್ರೇಮಸ್ಮಿತ ಸ್ನಿಗ್ಧ ನಿರೀಕ್ಷಣಾನನಂ
ಪಶ್ಯೇಮ ರೂಪಂ ತವ, ಸರ್ವಸೌಭಗವತ್ ॥

ಭಾಗವತ, ೧–೧೧–೪.

ದ್ವಾರಕೆಯ ಪ್ರಜೆಗಳು ಶ್ರೀಕೃಷ್ಣ ಪರಮಾತ್ಮನನ್ನು ಈ ಶಬ್ದಗಳಿಂದ ಸ್ತುತಿಮಾಡಿದರು: "ಹೇ ಪ್ರಭು, ನೀನು ನಮ್ಮ ಸಹಾಯ ಹಾಗೂ ನಾಥ ನಾಗಿರುವಿ. ನೀನು ದಯೆಯ ಸಾಗರ. ನಿನ್ನನ್ನು ಪಡೆದು ನಾವು ನಿಜವಾಗಿಯೂ ಧನ್ಯರಾಗಿದ್ದೇವೆ. ಪ್ರೇಮ ಮತ್ತು ಮಧುರಸ್ಮಿತದಿಂದೊಡಗೂಡಿದ ನಿನ್ನ ಮುಖಾರವಿಂದವು ದೇವತೆಗಳ ದರ್ಶನಕ್ಕೂ ದೂರವಾದುದು, ಇದನ್ನು ನಾವು ದರ್ಶನಮಾಡುತ್ತಿರುವೆವು."

ದ್ವಾರಕಾಕ್ಷೇತ್ರದ ವರ್ಣನೆಯು ಮಹಾಭಾರತ, ಹರಿವಂಶ, ವಾಯು ಪುರಾಣ, ವಿಷ್ಣುಪುರಾಣ, ಭಾಗವತ, ವರಾಹ ಪುರಾಣ, ಸ್ಕಂದಪುರಾಣ ಮುಂತಾದ ಗ್ರಂಥಗಳಲ್ಲಿದೆ. ಅದರಲ್ಲಿಯೂ ಸ್ಕಂದಪುರಾಣದಲ್ಲಿ ದ್ವಾರಕೆಗಾಗಿ ೪೪ ಅಧ್ಯಾಯಗಳಿವೆ.

ಪುರಾಣದಲ್ಲಿ ಈ ವರ್ಣನೆ ಇದೆ: ಮನುವಿನ ಪುತ್ರನಾದ ಯಯಾತಿಗೆ ಆನರ್ತನೆಂಬ ಮಗನಿದ್ದನು. ಆನರ್ತನ ಮಗನ ಹೆಸರು ರೇವತ ಎಂದು. ಆ ಆನರ್ತದೇಶದ ರಾಜಧಾನಿಯಾದ ದ್ವಾರಕಾ ಅಥವಾ ದ್ವಾರಾಮತೀ ಎಂಬ ಪ್ರಸಿದ್ಧವಾದ ಕುಶಸ್ಥಲಿಯಲ್ಲಿ ರಾಜಾ ರೇವತನು ಆಳುತಿದ್ದನು. ರೇವತನ ಮಗ ರೈವತ. ರೈವತನು ತನ್ನ ಮಗಳಾದ ರೇವತಿಯನ್ನು ಯೋಗ್ಯನಾದ ವರನಿಗೆ ಲಗ್ನಮಾಡಿಕೊಡಲಿಚ್ಛಿಸಿ, ಯೋಗ್ಯ ವರನು ದೊರೆಯದೆ, ಬ್ರಹ್ಮನ ಬಳಿಗೆ ಹೋಗಿ ವಿಚಾರಿಸಿದನು. ಆಗ ಬ್ರಹ್ಮನಂದನು, "ನಿನ್ನ ಸಂಭಾಷಣೆಯ ಈ ಕಾಲದಲ್ಲಿ ಎಷ್ಟೋ ರಾಜರು ಗತಿಸಿದರು, ಹುಟ್ಟಿ

ದರು. ನಿನ್ನ ಕಾಲದವರು ಈಗಿಲ್ಲ. ಪರಿಸ್ಥಿತಿಯನ್ನನುಸರಿಸಿ, ರೇವತಿಯ ಲಗ್ನವು ಈಗ ದ್ವಾರಕೆಯಲ್ಲಿರುವ ಶ್ರೀಕೃಷ್ಣನ ಅಣ್ಣ ಬಲರಾಮನೊಂದಿಗಾಗುವುದು ಉಚಿತವಾಗಿದೆ."

ಶ್ರೀಕೃಷ್ಣನು ಮಥುರೆಯಲ್ಲಿ ಕಂಸನನ್ನು ವಧಿಸಿದ್ದರಿಂದ, ಕಂಸನ ಮಾವನಾದ ಮಗಧಾಧಿಪನಾದ ಜರಾಸಂಧನೂ ಹಾಗೂ ಕಾಲಯವನನೂ ಜೊತೆಗೂಡಿ ಮಥುರಾಪಟ್ಟಣದ ಮೇಲೆ ಅನೇಕ ಸಾರಿ ಧಾಳಿಮಾಡಿದರು. ಅದಕ್ಕಾಗಿ ಶ್ರೀಕೃಷ್ಣನು ಸೌರಾಷ್ಟ್ರದ ಬಳಿಯ ಸಮುದ್ರದ ಹತ್ತಿರ ಬಲವತ್ತರವಾದ ಕೋಟೆಕೊತ್ತಳಗಳಿಂದೊಡಗೂಡಿದ ದ್ವಾರಕಾ ಪಟ್ಟಣವನ್ನು ನಿರ್ಮಿಸಿ, ಅಲ್ಲಿ ಯಾದವರೊಂದಿಗೆ ವಾಸಿಸಿದನು. ಹೀಗೆ ದ್ವಾರಕೆಯ ಸ್ಥಾಪನೆಯಾಯಿತು, ಈ ಸ್ಥಳವು ರೈವತಪರ್ವತದ ಹತ್ತಿರ ಇದ್ದಿತು. ಪುರಾಣಗಳ ಕಥಾನುಸಾರವಾಗಿ ಶ್ರೀಕೃಷ್ಣನ ಸಮಯದ ದ್ವಾರಕೆಯೂ, ಸಮುದ್ರವೂ ಹಾಗೂ ರೈವತಪರ್ವತವೂ ಸಮೀಪವಿದ್ದುವು.

ಋಷಿಶಾಪದಿಂದ ಮೋಹಗ್ರಸ್ತರಾದ ಯಾದವರು ಪ್ರಭಾಸದಲ್ಲಿ ತಮ್ಮತಮ್ಮೊಳಗೆ ಹೊಡೆದಾಡಿಕೊಂಡು, ನಾಶಹೊಂದಲು, ಶ್ರೀಕೃಷ್ಣನು ಪ್ರಭಾಸದಲ್ಲಿ ಒಂದು ಅಶ್ವತ್ಥ ವೃಕ್ಷದ ಬಳಿ ಕುಳಿತು ಸ್ವಧಾಮಕ್ಕೆ ತೆರಳಿದನು! ತದನಂತರ ಸಮುದ್ರವು ದ್ವಾರಕಾಪಟ್ಟಣವನ್ನು ಮುಳುಗಿಸಿತೆಂದು ಭಾಗವತದಲ್ಲಿ ಕಥೆಯಿದೆ. "ಸಮುದ್ರಃ ಪ್ಲಾವಯಿಷ್ಯತಿ"—"ಸಮುದ್ರಃ ಅಪ್ಲಾವಯತ್" (ಭಾಗವತ).

"ತ್ಯಕ್ತ್ವಾ ಭಗವದಾಲಯಮ್" (ಭಾಗ–೧ ಸ್ಕಂಧ ಮತ್ತು ೧೨) ಎಂಬ ವಚನಾನುಸಾರವಾಗಿ ಭಗವನ್ಮಂದಿರವೊಂದನ್ನು ಬಿಟ್ಟು ಉಳಿದ ದ್ವಾರಕೆಯು ಸಮುದ್ರದಲ್ಲಿ ಲೀನವಾಯಿತೆಂದೂ, ಈಗಿರುವ ದ್ವಾರಕೆಯೆಂದರೆ ಅದೇ ಭಗವದಾಲಯವೆಂದೂ ಭಾಗವತ ಕಥೆಯಿರುವುದು. ವಿಷ್ಣುಪುರಾಣದಲ್ಲಿಯೂ ಹೀಗೆ ಇದೆ:

ದ್ವಾರಕಾಂ ಚ ಮಯಾ ತ್ಯಕ್ತಾಂ ಸಮುದ್ರಃ ಪ್ಲಾವಯಿಷ್ಯತಿ ।
ಮದ್ವೇಶ್ಮ ಚೈಕಂ ಮುಕ್ತ್ವಾತು ಭಯಾನ್ಮತ್ತೋ ಜಲಾಶಯೇ ।
ತತ್ರ ಸನ್ನಿಹಿತಶ್ಚಾಹಂ ಭಕ್ತಾನಾಂ ಹಿತಕಾಮ್ಯಯಾ ॥

(ಅ. ೩೭—೩೮.)

ಪಶ್ಚಿಮಭಾರತದಲ್ಲಿ ಸೌರಾಷ್ಟ್ರದೇಶವಿದೆ. ಅದರ ಕೊನೆಯಲ್ಲಿ ಪಶ್ಚಿಮ ಸಮುದ್ರತೀರದಲ್ಲಿ ಓಖಾಮಂಡಲದಲ್ಲಿ ಗೋಮತೀನದೀ ಮತ್ತು ಸಮುದ್ರದ ಸಂಗಮದ ನಡುವೆ ಈ ದ್ವಾರಕಾನಗರಿ ಇದೆ.

ಏಳು ಮೋಕ್ಷದಾಯಕವಾದ ಪುರಿಗಳಲ್ಲಿ ದ್ವಾರಕೆಯೂ ಒಂದು. ಆ ಏಳು ಮಹಾಪುರಿಗಳು ಇವು: ೧. ಅಯೋಧ್ಯೆ ೨. ಮಥುರೆ ೩. ಮಾಯಾ (ಹರಿದ್ವಾರ) ೪. ಕಾಶೀ ೫. ಕಾಂಚೀ ೬. ಅವಂತಿಕಾ (ಉಜ್ಜಯಿನಿ) ೭. ದ್ವಾರಕಾ.

ಗುಜರಾತಿನ ರಾಜಧಾನಿಯಾದ ಅಹಮದಾಬಾದದ ವರೆಗೆ ಎಲ್ಲ ಭಾಗಗಳಿಂದ ಬರಲು ರೈಲ್ವೆ ಇದೆ. ಅಹಮದಾಬಾದದಿಂದ ದ್ವಾರಕೆಗೆ ಸೀದಾ ರೈಲ್ವೆ ಇದೆ. ಪ್ರತಿದಿನ, ಬೆಳಗ್ಗೆ—ಮಧ್ಯಾಹ್ನ—ರಾತ್ರಿ ಹೀಗೆ ಮೂರು ವೇಳೆಗಳಲ್ಲಿ ದ್ವಾರಕೆಗೆ ರೈಲುಬಂಡಿಗಳು ಬರುತ್ತಿವೆ, ಹೋಗುತ್ತಿವೆ. ಅಹಮದಾಬಾದ, ರಾಜಕೋಟೆ, ಜಾಮನಗರ ಮೂಲಕವಾಗಿ ದ್ವಾರಕೆಗೆ ಮೋಟಾರುಮಾರ್ಗವೂ ಇದೆ. ಬೊಂಬಾಯಿಯಿಂದ ಓಖಾಕ್ಕೆ ಸ್ಟೀಮ ಇರುತ್ತದೆ. ಓಖಾದಿಂದ ೨೦ ಮೈಲು ಮೋಟಾರು, ರೈಲು ದ್ವಾರಕೆಗೆ ಇದೆ.

ಸಮುದ್ರದ ಮಧ್ಯದಲ್ಲಿ ೧೨ ಯೋಜನಗಳ ವಿಸ್ತಾರದಲ್ಲಿ, ಅಸಂಖ್ಯ ಉದ್ಯಾನಗಳಿಂದ ಕೂಡಿದ, ಸುವರ್ಣ ಶಿಖರವುಳ್ಳ, ದೊಡ್ಡ ಗೋಪುರದೊಡಗೂಡಿದ ದ್ವಾರಕೆಯು ಶ್ರೀಕೃಷ್ಣನ ಸಮಯದಲ್ಲಿ ಇದ್ದಿತೆಂದು ವರ್ಣನೆ ಇದೆ. ದ್ವಾರಕೆಯಲ್ಲಿ ಆಕರ್ಷಣದ ಕೇಂದ್ರರೂಪವಾದ, ದ್ವಾರಕಾಧೀಶ ಶ್ರೀಕೃಷ್ಣನ ದೇವಸ್ಥಾನವಿದೆ. ಅದನ್ನೇ ತ್ರಿಲೋಕಸುಂದರ ಅಥವಾ ಜಗನ್ಮಂದಿರ ಎಂದು ಹೇಳುತ್ತಾರೆ. ಶ್ರೀಕೃಷ್ಣನ ಪೌತ್ರನಾದ ವಜ್ರನಾಭನು ವಿಶ್ವಕರ್ಮನ ಸಹಾಯದಿಂದ ಈ ದೇವಾಲಯವನ್ನು ನಿರ್ಮಿಸಿದ್ದನು. ಗೋಮತಿಯ ತೀರದಲ್ಲಿ ಈ ದೇವಸ್ಥಾನವಿದೆ. ಈ ದೇವಸ್ಥಾನವು ಏಳು ಅಂತಸ್ತಿನದ ಮತ್ತು ೧೪೦ ಅಡಿ ಎತ್ತರವಾಗಿದೆ. ಇಷ್ಟು ಎತ್ತರವಾದ ಶಿಖರದ ದೇವಸ್ಥಾನವು ಇನ್ನೆಲ್ಲಿಯೂ ಇಲ್ಲ. ಸಭಾಮಂಟಪಕ್ಕೆ ಐದು ಅಂತಸ್ತುಗಳಿವೆ, ಮತ್ತು ಆರು ಕಂಭಗಳ ಆಧಾರದಿಂದ ಗೋಳಾಕಾರವಾದ ಗುಮ್ಮಟವಿದೆ. ದೇವಸ್ಥಾನದ ಹೊರಭಾಗದ ವಲಯದಲ್ಲಿ ಸುಂದರವಾಗಿ ಕೆತ್ತಿದ ಶಿಲ್ಪಕಲೆಯಿದೆ. ದೇವಸ್ಥಾನದ ಸುತ್ತಲೂ ಕೋಟೆ ಇದೆ. ದೇವಸ್ಥಾನದೊಳಗೆ ನಡುವೆ ಬೆಳ್ಳಿಯ ಸಿಂಹಾಸನದಲ್ಲಿ ಭಗವಾನ್ ದ್ವಾರಕಾಧೀಶ ಶ್ರೀಕೃಷ್ಣನ ಮೂರ್ತಿಯು

ವಿರಾಜಿಸಿದೆ. ಈ ಮೂರ್ತಿಯು ಶ್ಯಾಮವರ್ಣದ ಸಾಲಿಗ್ರಾಮ ಶಿಲೆಯಿಂದಾಗಿ ಮೂರು ಅಡಿ ಎತ್ತರವಾಗಿದ್ದು, ಚತುರ್ಭುಜವುಳ್ಳುದ್ದಾಗಿದೆ. ಮೇಲ್ಗಡೆ ಅಂತಸ್ತಿನಲ್ಲಿ ಶ್ರೀ ಭುವನೇಶ್ವರೀ ಯಂತ್ರವಿದೆ. ಸಭಾಮಂಟಪದ ಒಂದು ಪಾರ್ಶ್ವದಲ್ಲಿ ಬಲರಾಮನ ಪ್ರತಿಮೆಯಿದೆ. ಈ ಮುಖ್ಯ ಮಂದಿರದ ಹೊರಗಡೆ— ಎಡಗಡೆ ತ್ರಿವಿಕ್ರಮ ದೇವಸ್ಥಾನವೂ, ಬಲಗಡೆ ಪ್ರದ್ಯುಮ್ನ ದೇವಸ್ಥಾನವೂ, ಕುಶೇಶ್ವರ ದೇವಸ್ಥಾನವೂ, ಪಟ್ಟರಾಣಿ ಮಂದಿರವೂ, ದೇವಕಿ ಮಂದಿರವೂ ಇವೆ.

ದೇವಸ್ಥಾನದ ಎಡಗಡೆ ಹಿಂಭಾಗದಲ್ಲಿ ಒಂದೇ ಕಂಪೌಂಡಿನೊಳಗೆ ಶ್ರೀಮದಾದ್ಯ ಶಂಕರಾಚಾರ್ಯರು ನಾಲ್ಕು ದಿಕ್ಕುಗಳಲ್ಲಿ ಪ್ರತಿಷ್ಠಿಸಿದ ನಾಲ್ಕು ಆಮ್ನಾಯ ಪೀಠಗಳಲ್ಲೊಂದಾದ ಪಶ್ಚಿಮಾಮ್ನಾಯ ಶ್ರೀ ಶ್ರೀ ಶಾರದಾ ಪೀಠಸ್ಥಾನವೂ ಮಠವೂ ಇವೆ.

ದ್ವಾರಕಾ ದೇವಸ್ಥಾನದ ಮೇಲೆ ಪರಮಾಧಿಕಾರವು ಜಗದ್ಗುರು ಶಂಕರಾಚಾರ್ಯರದ್ದೇ ಇರುತ್ತದೆ.

ದೇವಸ್ಥಾನದ ಸೇವೆಗಳಲ್ಲಿ ಗೋಪುರದ ಮೇಲಿನ ಧ್ವಜೋತ್ತೋಲನವೇ ಹೆಚ್ಚಿನದು. ಈ ಧ್ವಜವು ೫೭ ಗಜ ಉದ್ದವಾಗಿದೆ. ರಾಜಮಹಾರಾಜರು, ಶೇಠ್ ಸಾಹುಕಾರರು ಯಾತ್ರೆಗೆ ಬಂದಾಗ ಈ ಸೇವೆಯನ್ನು ಮಾಡುತ್ತಾರೆ. ಈ ಧ್ವಜ ಹಾರಿಸಬೇಕಾದರೆ ಮುಂಚೆ ದ್ವಾರಕೆಯಲ್ಲಿ ವಾಸಿಸುವ ಪುರೋಹಿತರಾದ ೩-೪ ಸಾವಿರ ಗುಗ್ಗಳೀ ಬ್ರಾಹ್ಮಣರ ಸಂತರ್ಪಣೆ ನಡೆಸುವುದಲ್ಲದೆ, ಜಗದ್ಗುರುಗಳವರ ಮಠಕ್ಕೆ ಕಾಣಿಕೆಕೊಟ್ಟು, ಶ್ರೀಗಳವರ ಕಾರಭಾರಿಯ ಪರವಾನಗೀ ಪಡೆದುಕೊಳ್ಳಬೇಕು. ಆಗ ಕಾರಭಾರಿಯು ದೇವಸ್ಥಾನದ ಮೇಲ್ಗಡೆ ಶಿಖರಕ್ಕೆ ಹೋಗುವ ಬಾಗಿಲನ್ನು ತೆರೆಯಿಸಿಕೊಡುತ್ತಾರೆ. ಅನಂತರ ಧ್ವಜ ಹಾರಿಸುವುದಾಗುತ್ತದೆ.

ದ್ವಾರಕೆಯಲ್ಲಿ ಶ್ರೀಕೃಷ್ಣ ಜನ್ಮಾಷ್ಟಮಿ, ಹೋಳೀಹಬ್ಬ, ದೀಪಾವಳೀ ಅನ್ನಕೂಟ, ವೈಶಾಖಶುದ್ಧದ ಅಕ್ಷಯ ತದಿಗೆ ಸಮಯದ ದೋಲೋತ್ಸವ ಮುಂತಾದ ಉತ್ಸವಗಳು ಮುಖ್ಯವಾಗಿವೆ.

ಶ್ರೀಮದಾದ್ಯ ಶಂಕರಾಚಾರ್ಯರು ಪೂರ್ವ ದಿಕ್ಕಿನಲ್ಲಿ ಜಗನ್ನಾಥ ಪುರಿಯಲ್ಲಿ ಗೋವರ್ಧನ ಪೀಠವನ್ನೂ, ದಕ್ಷಿಣ ದಿಕ್ಕಿನಲ್ಲಿ ಶೃಂಗೇರಿಯಲ್ಲಿ ಶೃಂಗೇರಿ ಪೀಠವನ್ನೂ, ಪಶ್ಚಿಮ ದಿಕ್ಕಿನಲ್ಲಿ ದ್ವಾರಕೆಯಲ್ಲಿ ಶ್ರೀ ಶಾರದಾಪೀಠ



ದ್ವಾರಕಿಯಲ್ಲಿ ಉಪರಾಷ್ಟ್ರಪತಿ ಡಾ। ರಾಧಾಕೃಷ್ಣನ್, ಗುಜರಾತಿನ
ಮುಖ್ಯಮಂತ್ರಿ ಡಾ। ಜೀವರಾಜ ಮೆಹತಾರೊಂದಿಗೆ.
(ಉದ್ಘಾಟನೆ ಕಾಲದಲ್ಲಿ)

ಶ್ರೀ ದ್ವಾರಕಾಧೀಶನ ಪೂಜೆ.



ಭಾರತದ ಉಪರಾಷ್ಟ್ರಪತಿ ಮತ್ತು ಪ್ರಧಾನ ಮಂತ್ರಿಗಳು ವಿದ್ಯಾವಿಕಾಸದಲ್ಲಿ
ಸಹಾನುಭೂತಿ ತೋರಿಸುತ್ತಿರುವುದು.



ರಾಷ್ಟ್ರಪತಿ ಡಾ। ರಾಜೇಂದ್ರ ಪ್ರಸಾದರು ತೀರ್ಥಸ್ವೀಕಾರ ಮಾಡುತ್ತಿರುವುದು,

ವನ್ನೂ, ಉತ್ತರ ದಿಕ್ಕಿನಲ್ಲಿ ಬದರಿಕಾಶ್ರಮದಲ್ಲಿ ಜ್ಯೋತಿರ್ಮಠವನ್ನೂ ಸ್ಥಾಪಿಸಿ, ತಮ್ಮ ಮೂವತ್ತೆರಡನೆಯ ವಯಸ್ಸಿನ ಕಾಲದೊಳಗೆ ಅಖಿಲ ಭಾರತದಲ್ಲಿಯೂ ಸಂಚರಿಸಿ, ದಿಗ್ವಿಜಯಮಾಡಿ, ಸನಾತನಧರ್ಮ ವಿಜಯ ಪತಾಕೆಯನ್ನು ಹಾರಿಸಿದ್ದರು. ದ್ವಾರಕೆಯಲ್ಲಿ ಕಾರ್ತಿಕ ಬಹುಳ ಪಾಡ್ಯದಿನ ಚಿಂತಾಮಣಿಮಂತ್ರದಿಂದ ಶ್ರೀ ಶಾರದಾಂಬೆಯನ್ನು ಆರಾಧಿಸಿದ್ದರೆಂದೂ, ಕಾರ್ತಿಕ ಬಹುಳ ಪಂಚಮಿಯಾದಿನ ಶಾರದಾಂಬೆಯನ್ನು ಸ್ಥಾಪಿಸಿದರೆಂದೂ, ಮಾಘ ಶುದ್ಧ ದಶಮಿಯಾದಿನ ಶ್ರೀ ಶಾರದಾ ಪೀಠವನ್ನು ಸ್ಥಾಪಿಸಿದರೆಂದೂ, ದ್ವಾರಕೆಯಲ್ಲಿನ ಆಧಾರದಿಂದ ತಿಳಿದುಬರುತ್ತದೆ. ಅಲ್ಲದೆ ಇಷ್ಟರ ವರೆಗೆ ೭೭ ಆಚಾರ್ಯರು ಈ ಪೀಠದಲ್ಲಿ ವಿರಾಜಿಸಿದರು. ಎಲ್ಲ ಆಚಾರ್ಯರು ವಿದ್ವಾಂಸರಾಗಿದ್ದು ಪಶ್ಚಿಮಾಮ್ನಾಯದ ಪ್ರಜೆಗಳ ಧಾರ್ಮಿಕೋನ್ನತಿಗಾಗಿ ಸತತವಾಗಿ ಪರಿಶ್ರಮಿಸಿದರೆಂದೂ ತಿಳಿದುಬರುತ್ತದೆ.

ಈಗ ಈ ದ್ವಾರಕಾ ಶಾರದಾಪೀಠದಲ್ಲಿ ಶ್ರೀಮಜ್ಜಗದ್ಗುರು ಶ್ರೀ ಶಂಕರಾಚಾರ್ಯ ಶ್ರೀ ಅಭಿನವ ಸಚ್ಚಿದಾನಂದತೀರ್ಥ ಸ್ವಾಮಿಗಳು ವಿರಾಜಿಸಿದ್ದಾರೆ. ಹಾಗೂ ಸಮಸ್ತ ಭಾರತದಲ್ಲಿ ಹಲವು ಬಾರಿ ಸಂಚರಿಸಿ, ಹಲವು ಸಭಾ ಸಮ್ಮೇಳನಗಳಿಗೆ ಅಧ್ಯಕ್ಷರಾಗಿ, ಸಂಚಾಲಕರಾಗಿ ಸನಾತನಧರ್ಮದ ಸಮುನ್ನತಿಗಾಗಿ ನಿತ್ಯವೂ ಪ್ರಯತ್ನಿಸುತಿದ್ದಾರೆ.

ಶ್ರೀ ಜಗದ್ಗುರು ಶ್ರೀ ಅಭಿನವ ಸಚ್ಚಿದಾನಂದತೀರ್ಥ ಸ್ವಾಮಿಗಳವರು ನಮ್ಮ ದಕ್ಷಿಣ ದೇಶದ ಮೈಸೂರವರೇ ಆಗಿರುವುದು ದಕ್ಷಿಣ ದೇಶಕ್ಕೊಂದು ಹೆಮ್ಮೆಯ ವಿಷಯವಾಗಿದೆ. ಈ ವಿಷಯದ ವಿವರವನ್ನು ವಾಚಕರು ತಿಳಿಯಲಪೇಕ್ಷಿಸಬಹುದಾದುದರಿಂದ ಅದನ್ನಿಲ್ಲಿ ತಿಳಿಸುವೆವು:-

ದ್ವಾರಕಾಪೀಠದ ಒಬ್ಬ ಸ್ವಾಮಿಗಳು ಮುಸಲ್ಮಾನರ ಉಪಟಳದಿಂದ ಮುನ್ನೂರು ವರ್ಷಗಳ ಹಿಂದೆ ದ್ವಾರಕೆಯಿಂದ ಕರ್ಣಾಟಕಕ್ಕೆ ಬಂದು, ಆಗ ವಿಜಯನಗರದ ಅರಸರಾಗಿದ್ದ ದೇವರಾಯ ಮಹಾರಾಯರ ಆದರಾತಿಥ್ಯದೊಂದಿಗೆ ಈಗಿನ ಕೋಲಾರ ಜಿಲ್ಲೆಯ ಮುಳುಬಾಗಿಲಿನಲ್ಲಿ ಮಠ ಕಟ್ಟಿಸಿಕೊಂಡು ನಿಂತರು. ಅಲ್ಲಿ ನೂರು ವರ್ಷ ಈ ಪರಂಪರೆಯು ನಡೆದು ಬರುತ್ತಿರಲು, ನಗರಸಂಸ್ಥಾನದ ದೊರೆಗಳಾದ ಶಿವಪ್ಪನಾಯಕರು ಆಗಿನ ಸ್ವಾಮಿಗಳಾದ ಅಗ್ನಿಮೂರ್ತಿ ಕೃಷ್ಣಾನಂದತೀರ್ಥರನ್ನು ಕರೆಸಿಕೊಂಡು, ತೀರ್ಥಹಳ್ಳಿ ತಾಲೂಕಿನ, ತುಂಗಭದ್ರಾತೀರದ, ಭದ್ರಾಸಮುದ್ರ ಅಗ್ರಹಾರ

ದಲ್ಲಿ (ಇದು ದೂರ್ವಾಸಋಷಿಗಳ ಆಶ್ರಮವಾಗಿ ಪ್ರಸಿದ್ಧವಾಗಿದೆ) ಇನಾಂ ಜಹಗೀರುಗಳನ್ನೂ ಕೊಟ್ಟು, ಮಠಕಟ್ಟಿಸಿ, ಇರಿಸಿಕೊಂಡರು. ಮುಳು ಬಾಗಿಲಿಂದ ಬಂದ ಸಂಸ್ಥಾನವಾದುದರಿಂದ ಭದ್ರಸಮುದ್ರ ಅಗ್ರಹಾರಕ್ಕೂ ಅಂದಿನಿಂದ ಮುಳುಬಾಗಿಲೆಂದೇ ಹೆಸರಾಯಿತು. ಇಲ್ಲಿಗೆ ಬಂದು ಸುಮಾರು ೨೦೦ ವರ್ಷಗಳಾದುವು.

ದ್ವಾರಕೆ ಮತ್ತು ಮುಳುಬಾಗಿಲುಗಳಿಗೆ ಹೆಚ್ಚಿನ ಸಾಮ್ಯಂಜಸ್ಯವಿರುವುದು ಗಮನಾರ್ಹವಾಗಿದೆ. ದೂರ್ವಾಸಾಶ್ರಮವೂ, ಕ್ಷೇತ್ರದೇವರಾದ ಸಿದ್ಧೇಶ್ವರನೂ ದ್ವಾರಕೆಯಲ್ಲಿರುವಂತೆ ಮುಳುಬಾಗಿಲಿನಲ್ಲಿಯೂ ಮಠದೆದುರು ತುಂಗಾನದೀ ನಡುವೆ ದೂರ್ವಾಸಾಶ್ರಮವಿದೆ, ಮತ್ತು ಪಕ್ಕದಲ್ಲಿ ಸಿದ್ಧೇಶ್ವರನ ಪರ್ವತವೂ ಇದೆ. ದ್ವಾರಕೆ ಎಂಬ ಹೆಸರು ಬರಲು ಕಾರಣ — ದ್ವಾರಕಾಧೀಶ ದೇವಸ್ಥಾನಕ್ಕೆ ಉತ್ತರದಲ್ಲಿ ಸ್ವರ್ಗದ್ವಾರವೂ ದಕ್ಷಿಣದಲ್ಲಿ ಮೋಕ್ಷದ್ವಾರವೂ ಇದ್ದು, ಹೀಗೆರಡು ದ್ವಾರಗಳಿರುವುದರಿಂದ ದ್ವಾರಕಾ ಎಂದು ಹೆಸರು ಬಂದಿದೆ. ಮುಳುಬಾಗಿಲು ಎಂಬುದು 'ಮೂಲ ಬಾಗಿಲು' ಎಂಬುದರ ಅಪಭ್ರಂಶವಾಗಿದೆ. 'ಬಾಗಿಲು' ಎಂದರೆ ದ್ವಾರ. ಆಗ ಮೂಲ ದ್ವಾರಕಾ ಎಂದಾಗುತ್ತದೆ. ಈ ರೀತಿಯಾದ ನೈಸರ್ಗಿಕವಾದ ಸಾಮ್ಯಗಳಿದ್ದು ಮುಳುಬಾಗಿಲು ದಕ್ಷಿಣದ ದ್ವಾರಕಾ ಎಂಬ ವದಂತಿಯು ಸಿದ್ಧವಾಗುತ್ತದೆ.

ದ್ವಾರಕೆಯು ಹವೆಯು ಉತ್ತಮವಾದುದೆಂದು ಪ್ರಸಿದ್ಧಿಯಿದೆ. ಗ್ರೀಷ್ಮ ಋತುವಿನಲ್ಲಿ ಹವೆ ತಿನ್ನುವ ಸ್ಥಳವಾಗಿದೆ. ದ್ವಾರಕೆಯ ಸುತ್ತಲೂ ಸಮುದ್ರವು ಸುತ್ತುವರಿದಿರುವುದರಿಂದ ಉಷ್ಣತಾಮಾನವು ಹೆಚ್ಚೆಂದರೆ ೮೬°. ಕಮ್ಮಿಯೆಂದರೆ ೭೮° ವಿರುವುದರಿಂದ ಯಾತ್ರಿಕರಿಗೆ ವಿಹಾರದ ಸ್ಥಳವಾಗಿದೆ. ಇಲ್ಲಿನ ಸಮುದ್ರದ ತರಂಗಗಳು ಶೀತಲ ಮತ್ತು ಆಹ್ಲಾದಜನಕವಾಗಿವೆ.

ದ್ವಾರಕೆಯಿಂದ ಇಪ್ಪತ್ತು ಮೈಲಿ ದೂರದಲ್ಲಿ ಕಚ್ಛದ ಖಾಡಿಯಲ್ಲಿ ಬೇಟ ಎಂಬ ದ್ವೀಪವಿದೆ. ವಲ್ಲಭಾಚಾರ್ಯ ಸಂಪ್ರದಾಯದವರಿಗೆ ಅದು ಪೂಜ್ಯಸ್ಥಾನವಾಗಿದೆ. ಅಲ್ಲಿ ಶ್ರೀಕೃಷ್ಣ ಮತ್ತು ಪಟ್ಟರಾಣಿಗಳ ದೇವಸ್ಥಾನವಿದೆ. ಹಿಂದಿನಿಂದ ಈ ಸ್ಥಾನವು ಶಂಖನಾರಾಯಣ ಕ್ಷೇತ್ರವೆಂದೂ, ಶಂಖೋದ್ಧಾರ ಕ್ಷೇತ್ರವೆಂದೂ ಪ್ರಸಿದ್ಧವಾಗಿದ್ದಿತು. ಶಂಖನೆಂಬ ರಾಕ್ಷಸನು ಋಷಿ



ಶ್ರೀ ಆದ್ಯ ಶಂಕರಾಚಾರ್ಯರು.

ಮುನಿಗಳನ್ನು ಹಿಂಸಿಸುತಿದ್ದ ಭಗವಂತನು ಅವನನ್ನು ಕೊಂದು, ಮುನಿಗಳನ್ನು ರಕ್ಷಿಸಿದ್ದರಿಂದ ಈ ಹೆಸರು ಬಂದಿತು.

ದ್ವಾರಕೆಯಿಂದ ಸ್ವಲ್ಪ ದೂರದಲ್ಲಿ 'ಗೋಪೀತಲಾವ' ಎಂಬ ಪವಿತ್ರ ಸರೋವರವಿದೆ. ಈ ಸರೋವರದಲ್ಲಿ ಶುಭ್ರವಾದ ಗೋಪೀಚಂದನವು ಸಿಗುತ್ತದೆ. ಗೋಪಿಯರು ಇದ್ದ ಸ್ಥಳ ಇದು. ಈ ಗೋಪೀಚಂದನದಲ್ಲಿ ಒಂದು ವಿಶೇಷವೇನೆಂದರೆ—ಗೋಪಿಯ ಹೆಂಟೆಯನ್ನೊಡೆದರೆ ಒಳಗೆ ಚಕ್ರಾಂಕಿತ ಇರುತ್ತದೆ.

ದ್ವಾರಕೆಯಿಂದ ಪೂರ್ವದಲ್ಲಿ ಪಿಂಡಾರಕ ಕ್ಷೇತ್ರವಿದೆ. ಇಲ್ಲಿ ಶ್ರಾದ್ಧ ಮಾಡಿದ ಪಿಂಡವನ್ನು ಸರೋವರದಲ್ಲಿ ಹಾಕಿದರೆ ಅದು ತೇಲುತ್ತದೆ. ಆದುದರಿಂದ 'ಪಿಂಡತಾರಕ' ಎಂದು ಹೆಸರು ಬಂದಿದೆ.

ಸ್ಕಂದಪುರಾಣದಲ್ಲಿ ಉಲ್ಲೇಖವಿದೆ: "ಮನುಷ್ಯನು ಒಂದುವೇಳೆ ಕಾಶಿ, ಕುರುಕ್ಷೇತ್ರ, ಪ್ರಭಾಸ, ಪುಷ್ಕರಗಳಿಗೆ ಯಾತ್ರೆಗಾಗಿ ಹೋಗದಿರಲಿ—ಆದರೆ, ದ್ವಾರಕೆಗೆ ಮಾತ್ರ ಖಂಡಿತ ಹೋಗಿ ಪ್ರಭುವಿನ ದರ್ಶನಮಾಡಬೇಕು."

ದ್ವಾರಕೆಯಲ್ಲಿ ಐದು ಗಕಾರಕ್ಕೆ ಪ್ರಸಿದ್ಧಿಯಿದೆ: ೧. ಗೋಮತೀನದಿ (ಗೋಮತೀ ಸ್ನಾನ) ೨. ಗೋಮಯ (ಗೋಮಯ ಸ್ನಾನ). ೩. ಗೋದಾನ. ೪. ಗೋಪೀಚಂದನ. ೫. ಗೋಪೀನಾಥನ ಸಂದರ್ಶನ.

ತಸ್ಯಾಂ ವಸತಿ ವಿಶ್ವಾತ್ಮಾ ಭುಕ್ತಿಮುಕ್ತಿಪ್ರದೋ ಹರಿಃ ।
ಕಲಾ ಷೋಡಶಸಂಯುಕ್ತೋ ಮೂರ್ತಿ ದ್ವಾದಶ ಸಂಯುತಃ ॥
ತದೇವ ಪರಮಂ ಧಾಮ ತದೇವ ಪರಮಂ ಪದಮ್ ।
ದ್ವಾರಕಾಸಾ ಚ ವೈ ಧನ್ಯಾ ಯತ್ರಾಸ್ತೆ ಮಧುಸೂದನ ॥
ಯತ್ರ ಕೃಷ್ಣಶ್ಚತುರ್ಬಾಹುಃ ಶಂಖಚಕ್ರಗದಾಧರಃ ।
ನರ ಮುಕ್ತಿಂ ಪ್ರಯಾಸ್ಯಂತಿ ತತ್ರಗತ್ವಾ ಕಲೌಯುಗೇ ॥

(ಸ್ಕಂದಪುರಾಣ)

ತಾತ್ಪರ್ಯ:— ಸುಖಸಮೃದ್ಧಿ ಕೊಡುವ, ಮುಕ್ತಿಯೀಯುವ, ಭಗವಾನ್ ವಿಷ್ಣುವು ಷೋಡಶಕಲೆಗಳಿಂದಲೂ, ದ್ವಾದಶಮೂರ್ತಿಗಳಿಂದಲೂ ಯುಕ್ತನಾಗಿ ದ್ವಾರಕೆಯಲ್ಲಿ ಇರುತ್ತಾನೆ. ಮಧುಸೂದನನು ನಿವಾಸಿಸಿರುವ ದ್ವಾರಕೆಯು ನಿಜವಾಗಿ ಧನ್ಯ; ಮತ್ತು ಇದು ನಿಜವಾದ ಯಾತ್ರಾಸ್ಥಳವಾಗಿದೆ ನಾಲ್ಕು ಭುಜಗಳಲ್ಲಿ ಶಂಖ— ಚಕ್ರ —ಗದಾ - ಪದ್ಮಗಳಿಂದ

ಭಗವಂತನು ವಿರಾಜಿಸುತ್ತಾನೆ. ಈ ಕಲಿಯುಗದಲ್ಲಿ ಶ್ರದ್ಧಾಳು ಭಕ್ತರಿಗೆ ಈ ದ್ವಾರಕೆಯು ದರ್ಶನವು ಮುಕ್ತಿಯೀಯುವುದು.

## ಶ್ರೀ ಶಾರದಾಪೀಠ ವಿದ್ಯಾಸಭೆ

ದೇಶದ ಧರ್ಮ, ಸಂಸ್ಕೃತಿ, ವಿದ್ಯೆಯು ಅಭಿವೃದ್ಧಿಗೆ ದ್ವಾರಕೆಯುಲ್ಲಿ ಜಗದ್ಗುರುಗಳು 'ಶ್ರೀ ಶಾರದಾಪೀಠ ವಿದ್ಯಾಸಭೆ' ಎಂಬ ರಿಜಿಸ್ಟ್ರೀ ಸಂಸ್ಥೆಯನ್ನು ಸ್ಥಾಪಿಸಿ, ಅದರ ಆಶ್ರಯದಲ್ಲಿ ಶ್ರೀ ದ್ವಾರಕಾಧೀಶ ಸಂಸ್ಕೃತ ವಿದ್ಯಾಪೀಠ, ಭಾರತೀಯ ವಿದ್ಯಾ ಸಂಶೋಧನ ಮಂದಿರ, ಶಾರದಾಪೀಠ ಆರ್ಟ್ಸ್ ಕಾಲೇಜನ್ನು ಸ್ಥಾಪಿಸಿದ್ದಾರೆ. ಜಾಮನಗರದ ಮಹಾರಾಜರ ಮತ್ತು ಭಾರತದ ಉಪರಾಷ್ಟ್ರಪತಿ ಡಾ| ರಾಧಾಕೃಷ್ಣನ್‌ರ ಕೈಯಿಂದ ಉದ್ಘಾಟಿತವಾದ ಈ ಸಂಸ್ಥೆಗಳು ಉನ್ನತಿಯ ಪಥದಲ್ಲಿವೆ.

ಆರ್ಟ್ಸ್ ಕಾಲೇಜಿಗೆ ಪ್ರಿನ್ಸಿಪಾಲರಾಗಿ ಡಾ| ರಮೇಶಚಂದ್ರ ಜೇಟಾಯಿ, M. A., Ph. D., ಇವರೂ, ಉಳಿದೆರಡು ಸಂಸ್ಥೆಗಳಿಗೆ ಡೈರೆಕ್ಟರಾಗಿ ಡಾ| ತ್ರ್ಯಂಬಕಲಾಲ ದವೆ, M. A., Ph. D. ಇವರೂ ಇದ್ದಾರೆ.

ಆರ್ಟ್ಸ್ ಕಾಲೇಜಿನಲ್ಲಿ ಸಂಸ್ಕೃತಕ್ಕೆ ಪ್ರಾಧಾನ್ಯವಿಟ್ಟಿದೆ. ಸಂಸ್ಕೃತ ವಿದ್ಯಾಪೀಠದಲ್ಲಿ ಪ್ರಥಮಾ, ಮಧ್ಯಮಾ, ಶಾಸ್ತ್ರೀ ಮುಂತಾದ ವರ್ಗಗಳ ಅಭ್ಯಾಸವಾಗುತ್ತದೆ. ಸಂಶೋಧನ ಮಂದಿರದಲ್ಲಿ ಐದು ಜನ M. A. ಆದವರು ಡಾಕ್ಟರೇಟ್ ಡಿಗ್ರಿಗೆ ಕಲಿಯುತ್ತಾರೆ. ಮತ್ತು ಉಚ್ಚತರ ಗ್ರಂಥ ಸಂಶೋಧನೆ, ಮೇಲ್ಮಟ್ಟದ ವಿಮರ್ಶಾತ್ಮಕವಾದ ಷಾಣ್ಮಾಸಿಕ ಪತ್ರಿಕಾ ಪ್ರಕಾಶನವಾಗುತ್ತಿದೆ.

ಪ್ರಾಚೀನ ವಸ್ತುಸಂಗ್ರಹಾಲಯವೂ, ದೊಡ್ಡ ಪುಸ್ತಕ ಭಂಡಾರವೂ ಇದೆ. ವರ್ಷಕ್ಕೆ ೧ ಅಥವಾ ೨ ಸಾರಿ ಉಚ್ಚವಿದ್ವಾಂಸರ ವ್ಯಾಖ್ಯಾನ ಮಾಲೆಯೂ ನಡೆದಿದೆ.

ಗುಜರಾತ್ ಸರಕಾರವು ದ್ವಾರಕೆಯುಲ್ಲಿ ೨-೩ ಲಕ್ಷ ಬೆಲೆಬಾಳುವ ಮನೆ, ಸ್ಥಳವನ್ನು ಕೊಟ್ಟಿದೆ. ಬೊಂಬಾಯಿಯ ಗವರ್ನರರು ೫೦೦೦ನ್ನೂ, ಗುಜರಾತದ ಗವರ್ನರರು ೧೫೦೦೦ನ್ನೂ ಕೊಟ್ಟು ಸಂಸ್ಥೆಗೆ ಸಂರಕ್ಷಕರಾಗಿದ್ದಾರೆ. ಡಾ| ರಾಧಾಕೃಷ್ಣನ್ನರೂ ಸಂರಕ್ಷಕರಾಗಿದ್ದಾರೆ.

ಅನೇಕ ಧನಿಕ ಸಂಸ್ಥೆಗಳು ಈ ವಿದ್ಯಾಪೀಠಕ್ಕೆ ಯೋಗ್ಯ ಸಹಾಯ ಮಾಡುತ್ತಿವೆ.

ಸಂಗೀತ-ಚಿತ್ರಕಲಾಲಯ, ಯೋಗಾಶ್ರಮ, ಗ್ರಾಮೋದ್ಯೋಗ, ವಾನಪ್ರಸ್ಥಾಶ್ರಮ, ಸಾಧಕಾಶ್ರಮ ಮುಂತಾದವುಗಳ ಯೋಜನೆಯೂ ಇದೆ.

---

ಶ್ರೀ ಶಾರದಾಪೀಠ (ದ್ವಾರಕಾಧೀಶ ಮತ್ತು ತ್ರಿಕಮಜೀ ಮಂದಿರಗಳ ನಡುವೆ)



(ಮುಖಪತ್ರ) ದ್ವಾರಕಿಯಲ್ಲಿ ವೇಣುಲೋಲ ☞



ಶ್ರೀ ಜಗದ್ಗುರುಗಳು

Printed at The Prabhat Printers Ltd., Mangalore.